# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 1362 |
| **ಸದಸ್ಯರ ಹೆಸರು** | ಕೆ.ವಿ.ನಾರಾಯಣಸ್ವಾಮಿ (ವಿಧಾನಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | 24.12.2021 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಕೈಗೊಳ್ಳುವ ವಿವಿಧ ಕಾಮಗಾರಿಗಳ ಬಾಳಿಕೆಯ ಅವಧಿ ಎಷ್ಟು; (ಕಚ್ಚಾ ರಸ್ತೆ, ಚರಂಡಿ ಮತ್ತು ಕಟ್ಟಡಗಳು) ಇದರ ಕುರಿತಾಗಿ ಇರುವ ಸುತ್ತೋಲೆ/ಆದೇಶಗಳನ್ನು ನೀಡುವುದು; | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಕೈಗೊಂಡ ವಿವಿಧ ಕಾಮಗಾರಿಗಳ ಬಾಳಿಕೆ ಅವಧಿ ಕುರಿತಾಗಿ ವಿನ್ಯಾಸದಲ್ಲಿ IRCSP-72-2015 ರಂತೆ ಕನಿಷ್ಠ 10 ವರ್ಷಗಳ ಅವಧಿಗೆ ಪರಿಗಣಿಸಿ, ಡಾಂಬರ್ ರಸ್ತೆಗಳನ್ನು ನಿರ್ಮಾಣ ಮಾಡಲಾಗುತ್ತಿದೆ. ಮುಂದುವರೆದು ರಸ್ತೆಗಳ ಮೇಲಿನ ವಾಹನ ಸಾಂದ್ರತೆಗನುಸಾರ ಅವಶ್ಯ ಸಬಲೀಕರಣದ ಪದರಗಳನ್ನು ಅಳವಡಿಸಿ, ಡಾಂಬರ್ ಮುಚ್ಚು ಪದರಿಗೆ ಅವಕಾಶ ಕಲ್ಪಿಸಲಾಗುತ್ತಿದೆ.<br><br>ಕಾಂಕ್ರೀಟ್ ರಸ್ತೆಗಳ ವಿನ್ಯಾಸ IRC:SP-62-2014 ರಲ್ಲಿ ಸುಮಾರು 20 ವರ್ಷಗಳ ಬಾಳಿಕೆಗೆ ಪರಿಗಣಿಸಿ ಕಾಂಕ್ರೀಟ್ ರಸ್ತೆಗಳನ್ನು ನಿರ್ಮಾಣ ಮಾಡಲಾಗುತ್ತಿದೆ.<br><br>ವಿವರಗಳನ್ನು **ಅನುಬಂಧ 1 & 2** ರಲ್ಲಿ ಲಗತ್ತಿಸಿದೆ. |
| ಆ. | ಸದರಿ ಕಾಮಗಾರಿಗಳು ಅವಧಿ ಪೂರ್ವದಲ್ಲೇ ಶಿಥಿಲ/ದುರಸ್ತಿ/ಹಾಳಾದರೆ ಸದರಿ ಕಾಮಗಾರಿಗಳ ಗುಣಮಟ್ಟಕ್ಕೆ ಯಾವ ಅಧಿಕಾರಿಗಳನ್ನು ಹೊಣೆಗಾರರನ್ನಾಗಿ ಮಾಡಲಾಗುವುದು; | ಕಾಮಗಾರಿಯ ಅವಧಿ ಪೂರ್ವದಲ್ಲಿ ಶಿಥಿಲಗೊಂಡು ಹಾಳಾದರೆ ಕೂಲಂಕುಷವಾಗಿ ಅವಲೋಕಿಸಲು ತಾಂತ್ರಿಕತೆ ಮತ್ತು ಉಪಕರಣಗಳ ಲಭ್ಯವಿದ್ದು, ವರದಿಗಳನುಸಾರ ಸಂಬಂಧಪಟ್ಟ ಅನುಷ್ಠಾನಾಧಿಕಾರಿಗಳನ್ನು ಹೊಣೆಗಾರರನ್ನಾಗಿಸಿ ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಲಾಗುತ್ತಿದೆ.<br><br>ಕೆಲವೊಂದು ಸಂಧರ್ಭಗಳಲ್ಲಿ ಗುತ್ತಿಗೆದಾರರನ್ನೂ ಸಹ ಸಂದರ್ಭಾನುಸಾರ ಹೊಣೆಗಾರರನ್ನಾಗಿಸಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಕೈಗೊಳ್ಳಲಾಗಿರುವ ಕಾಮಗಾರಿಗಳ ಅಳತೆ ಪರಿಶೀಲನೆಯನ್ನು ಮಾಡುವ ತಾಂತ್ರಿಕ ಜ್ಞಾನ ಪಂಚಾಯತ್ ಅಭಿವೃದ್ಧಿ | ಇಲ್ಲ<br><br>ಗ್ರಾಮ ಪಂಚಾಯಿತಿಯಿಂದ ಅನುಷ್ಠಾನಗೊಳಿಸುವ ಎಲ್ಲಾ ಯೋಜನೆಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಅಳತೆಗಳಿಗೂ, ಗುಣಮಟ್ಟಕ್ಕೂ ಮತ್ತು ಕಾಮಗಾರಿಯ ವಾಸ್ತವ ಅಳತೆಗೂ, |

| | | |
|---|---|---|
| | ಅಧಿಕಾರಿ ಗಳಿಗೆ ಇದೆಯೇ; ಇಲ್ಲದೇ ಇದ್ದಲ್ಲಿ ಸದರಿ ಅಳತೆ ಸರಿಯಾಗಿ ಪರಿಶೀಲನೆ ಮಾಡದೆ ಕಾಮಗಾರಿಯ ಹಣ ಪಾವತಿ ಮಾಡಿದ್ದಲ್ಲಿ ಅಳತೆಗೆ ಜವಾಬ್ದಾರರು ಯಾರು ಪರಿಮಾಣ/ಅಳತೆಗೆ ಸಂಬಂಧಿಸಿದಂತೆ ಯಾರನ್ನು ಜವಾಬ್ದಾರರನ್ನಾಗಿ ಮಾಡಲಾಗುವುದು? (ಈ ಕುರಿತುಇರುವ ಆದೇಶ ಮತ್ತು ಸುತ್ತೋಲೆಯನ್ನು ನೀಡುವುದು) | ಗುಣಮಟ್ಟಕ್ಕೂ ವ್ಯತ್ಯಾಸ ಕಂಡುಬಂದಲ್ಲಿ ಅಳತೆ ಪುಸ್ತಕದಲ್ಲಿ ದಾಖಲಿಸಿದ ಸಿಬ್ಬಂದಿ /ಅಧಿಕಾರಿಗಳು ಮತ್ತು ಚೆಕ್ ಮೆಷರ್‌ಮೆಂಟ್ ಮಾಡಿದ ಅಧಿಕಾರಿಗಳು ಕರ್ನಾಟಕ ಪಂಚಾಯತ್ ರಾಜ್ (ಗ್ರಾಮ ಪಂಚಾಯಿತಿಗಳ ಆಯವ್ಯಯ ಮತ್ತು ಲೆಕ್ಕ ಪತ್ರಗಳು) ನಿಯಮಗಳು 2006ರ ನಿಯಮ 86ರಲ್ಲಿ ವಿವರಿಸಿದಂತೆ ಹೊಣೆಗಾಗಿರರಾಗಿರುತ್ತಾರೆ.<br><br>ಅದರಂತೆ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸುವ ಎಲ್ಲಾ ಯೋಜನೆ/ ಕಾರ್ಯಕ್ರಮಗಳ ಕಾಮಗಾರಿಗಳನ್ನು ಅನುಷ್ಠಾನ ಮಾಡಿದ ನಂತರ ತಾಂತ್ರಿಕ ಸಿಬ್ಬಂದಿಯನ್ನು ಹೊಣೆಗಾರರನ್ನಾಗಿ ಮಾಡಲು ಎಲ್ಲಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ. |

ಸಂಖ್ಯೆ: ಗ್ರಾಅಪ:15ನೇವಿಸ:142:ಆರ್.ಆರ್.ಸಿ:2021

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು